**ಟಿಪ್ಪಣಿ :**

ಸಂದರ್ಶನವು **10** ಅಂಕಗಳನ್ನೊಳಗೊಂಡಿರುತ್ತದೆ.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ, ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಅಂಗವಿಕಲ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿ ಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿ ಗಳು ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿ :**

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು :**

ಅ. **ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.**

ಆ. **ಗರಿಷ್ಠ ವಯೋಮಿತಿ**

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಜಾತಿ, ಪ.ಪಂಗಡ, ಪ್ರವರ್ಗ–1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಿಲಿಕೆ :**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ಈ ಕೆಳಗೆ ತಿಳಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 03 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ / ವಿಧವೆಯಾಗಿದ್ದಲ್ಲಿ / ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.
4. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು, ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
5. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
6. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮ ಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**ಸೂಚನೆ :**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977 ರ ಪ್ರಕಾರ 02 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ :**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ **ಅಭ್ಯರ್ಥಿಯು ತಮ್ಮ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು.** ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು

ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ದೃಢೀಕರಿಸಿ ಅರ್ಜಿ ಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ–583 101"** ಇವರಿಗೆ ದಿನಾಂಕ:**15–12–2011** ರ ಅಪರಾಹ್ನ **05.00** ಗಂಟೆಯೊಳಗೆ ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು :**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ **ಸ್ವಯಂ ದೃಢೀಕರಿಸಿದ** ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಪರಿಗಣಿಸಲಾಗುವುದಿಲ್ಲ. (ಯಾವುದೇ ಮೂಲ ಪ್ರಮಾಣ ಪತ್ರಗಳನ್ನು ಲಗತ್ತಿಸಕೂಡದು).

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ.
2. ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ / ಸಂಚಿತ ದಾಖಲೆಯ ಉದ್ಧೃತಭಾಗ (**Extract of Cumulative Record**) / ವರ್ಗಾವಣೆ ಪ್ರಮಾಣಪತ್ರ / ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ **"ಡಿ"** ಯಲ್ಲಿ ಪ್ರವರ್ಗ–**1** ರ ಅಭ್ಯರ್ಥಿಗಳು ನಮೂನೆ**"ಇ"** ಯಲ್ಲಿ ಮತ್ತು **2**ಎ, **2**ಬಿ, **3**ಎ ಮತ್ತು **3**ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ – ಎಫ್ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಜಾತಿ / ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ/**96**/ಸೇನನಿ/**2005**, ದಿನಾಂಕ:**10–08–2005** ರ ಪ್ರಕಾರ ನಿಗದಿತ ನಮೂನೆ–**2** ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ–2 ರ ಜೊತೆ ನಮೂನೆ–1 ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
7. ಕನ್ನಡ ಮಾಧ್ಯಮ (ಕ.ಮಾ.ಅ.) ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.
8. ಅಂಗವಿಕಲ (ಅಂ.ಅ.) ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ:**19–11–2005**ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ:ಸಿಆಸುಇ/**115**/ಸೇನನಿ/**2005** ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು. ಅಂಗವಿಕಲ ಮೀಸಲಾತಿಯಡಿ ಆಯ್ಕೆ ಹೊಂದುವ ಅಭ್ಯರ್ಥಿಗಳು ಅಂಗವೈಕಲ್ಯತೆಯನ್ನು ಹೊಂದಿದ್ದರೂ ಸಹ ಸದರಿ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಸದರಿ ನ್ಯೂನ್ಯತೆಯಿಂದ ಅಡ್ಡಿ ಉಂಟಾಗದೆಂದು ತಿಳಿಸಿರುವ ದೈಹಿಕ ಅರ್ಹತೆಯ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಸೇರುವ ಮುನ್ನ ನೀಡಬೇಕಾಗುತ್ತದೆ.
9. ಯೋಜನಾ ನಿರಾಶ್ರಿತ (ಯೋ.ನಿ.ಅ.) ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ/**44**/ ಸೇನನಿ/**2001**ರ ದಿನಾಂಕ:**27–07–2001** ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.
10. ಮಾಜಿ ಸೈನಿಕ (ಮಾ.ಸೈ.) ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸುವುದು.
11. ವಾಹನ ಚಾಲನೆಯ ರಹದಾರಿ (ಆದೇಶ ಜಾರಿಕಾರರ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಮಾತ್ರ).
12. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರರಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು.
13. ಸ್ವಯಂ ವಿಳಾಸವಿರುವ ರೂ.**5**/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

**ವಿಶೇಷ ಸೂಚನೆ :**

**ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.**

ಯಾವುದೇ ಅಭ್ಯರ್ಥಿಯು ಸರ್ಕಾರಿ / ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

ಒಬ್ಬನೇ ಅಭ್ಯರ್ಥಿಯು ಒಂದು ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ ಒಂದು ಅರ್ಜಿಯನ್ನು ಮಾತ್ರ (ಕ್ರಮಬದ್ಧವಾಗಿದ್ದಲ್ಲಿ) ಪರಿಗಣಿಸಲಾಗುವುದು.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆ ಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಉಮಾ ಎಂ.ಜಿ.,**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ.

ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು

**ಅರ್ಜಿ ನಮೂನೆ**

ರವರಿಗೆ,

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**
**ಬ ಳ್ಳಾ ರಿ.**

ತಮ್ಮ ಕಛೇರಿಯ ದಿನಾಂಕ:08–11–2011 ರ ಅಧಿಸೂಚನೆಯ ಮೇರೆಗೆ ನಾನು ________ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | | | |
|---|---|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | | | |
| 2 | ತಂದೆ / ಗಂಡನ ಹೆಸರು | | | | | |
| 3 | ತಾಯಿಯ ಹೆಸರು | | | | | |
| 4 | ಜನ್ಮ ದಿನಾಂಕ | | | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು | | |
| | | | | | | |
| 6 | ಲಿಂಗ | ಪುರುಷ | ಮಹಿಳೆ | | | |
| | | | | | | |
| 7 | ರಾಷ್ಟ್ರೀಯತೆ | | | | | |
| 8 | ಧರ್ಮ ಮತ್ತು ಜಾತಿ | | | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ/ವಿವಾಹಿತೆ | ಅವಿವಾಹಿತ/ಅವಿವಾಹಿತೆ | | | |
| | | | | | | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ ? | | | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ | ಹೌದು | ಇಲ್ಲ | | | |
| | | | | | | |
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ ? | ಹೌದು | ಇಲ್ಲ | | | |
| | | | | | | |
| 13 | ಕೋರುವ ಮೀಸಲಾತಿಗಳು : (ಕೋರುವ ಮೀಸಲಾತಿಯನ್ನು ✓ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | |
| | | | | | | |
| | | 2ಎ | 2ಬಿ | 3ಎ | 3ಬಿ | |
| | | | | | | |
| 14 | ನೀವು ಈ ಯಾವುದಾದರೂ ಮೀಸಲಾತಿ ಅಡಿಯಲ್ಲಿ ಬರುತ್ತೀರ ? (ಕೋರುವ ಮೀಸಲಾತಿಯನ್ನು ✓ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಶಿ. | ಮಾ.ಸೈ. | ಅಂ.ಅ. | ಯೋ.ನಿ.ಅ. |
| | | | | | | |

<table>
<tr><td rowspan="12">15</td><td>ವಿದ್ಯಾರ್ಹತೆ :<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು)<br>(ಸೂಚನೆ: ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು)</td><td>ತೇರ್ಗಡೆಯಾದ ತಿಂಗಳು ಮತ್ತು ವರ್ಷ</td><td>ಗರಿಷ್ಠ ಅಂಕಗಳು</td><td>ಗಳಿಸಿದ ಅಂಕಗಳು</td></tr>
<tr><td>7ನೇ ತರಗತಿ</td><td></td><td></td><td></td></tr>
<tr><td>ಎಸ್.ಎಸ್.ಎಲ್.ಸಿ.</td><td></td><td></td><td></td></tr>
<tr><td>ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ)</td><td></td><td></td><td></td></tr>
<tr><td>ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ)</td><td></td><td></td><td></td></tr>
<tr><td>ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ)</td><td></td><td></td><td></td></tr>
<tr><td>ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ)</td><td></td><td></td><td></td></tr>
<tr><td>ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ)</td><td></td><td></td><td></td></tr>
<tr><td>ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ)</td><td></td><td></td><td></td></tr>
<tr><td>ಇತರೆ ಯಾವುದೇ ವಿದ್ಯಾರ್ಹತೆ :</td><td colspan="3"></td></tr>
</table>

<table>
<tr><td rowspan="2">16</td><td rowspan="2">ನೀವು ವಾಹನ ಚಾಲನೆಯ ಲೈಸೆನ್ಸ್ ಹೊಂದಿದ್ದೀರ ?<br>(ಸ್ವಯಂ ದೃಢೀಕರಿಸಿದ ಚಾಲ್ತಿಯಲ್ಲಿರುವ ವಾಹನ ಚಾಲನಾ ರಹದಾರಿ ನಕಲನ್ನು ಲಗತ್ತಿಸಬೇಕು. ಜಾರಿಕಾರರ ಹುದ್ದೆಗೆ ಮಾತ್ರ ಅನ್ವಯವಾಗುತ್ತದೆ)</td><td>ದ್ವಿಚಕ್ರ ವಾಹನ ಚಾಲನ ರಹದಾರಿ</td><td>ಲಘು ವಾಹನ ಚಾಲನ ರಹದಾರಿ</td><td>ಭಾರೀ ವಾಹನ ಚಾಲನ ರಹದಾರಿ</td></tr>
<tr><td></td><td></td><td></td></tr>
<tr><td rowspan="2">17</td><td rowspan="2">ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರ ?<br>(ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಬೇಕು)</td><td colspan="2">ಹೌದು</td><td>ಇಲ್ಲ</td></tr>
<tr><td colspan="2"></td><td></td></tr>
<tr><td>18</td><td>ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ</td><td colspan="3"></td></tr>
<tr><td>19</td><td>ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ</td><td colspan="3"></td></tr>
<tr><td>20</td><td>ನಿಮ್ಮ ಸ್ವವಿಳಾಸವಿರುವ ರೂ.5/– ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರ</td><td colspan="3"></td></tr>
</table>

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡುಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

ಸ್ಥಳ :

ದಿನಾಂಕ : **ಅಭ್ಯರ್ಥಿಯ ಸಹಿ.**

**ಪಿ.ಆರ್. 326**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಚೇರಿ, ಕೊಪ್ಪಳ

**ಅಧಿಸೂಚನೆ ಸಂಖ್ಯೆ.ಎಡಿಎಮ್– 03/2011 ದಿನಾಂಕ: 04ನೇ ನವೆಂಬರ್, 2011.**

**ವಿಷಯ** : ಶೀಘ್ರಲಿಪಿಗಾರರು/ಬೆರಳಚ್ಚುಗಾರರು /ಬೆರಳಚ್ಚು–ನಕಲುಗಾರರು/ಜಾರಿಕಾರರ /ಜವಾನರ ಅಭ್ಯರ್ಥಿಗಳ ನೇಮಕಾತಿ ಬಗ್ಗೆ.

**ಉಲ್ಲೇಖ** : (1) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ II 36/2003 ದಿನಾಂಕ 23–6–2011 ಮತ್ತು ದಿನಾಂಕ:24–10–2011.

(2) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ II 254/2011 ದಿನಾಂಕ 01–10–2011

(3) ಅಧಿಸೂಚನೆ ಕೇರಿ ವರದಿ ದಿನಾಂಕ: 03–11–2011.

ಮೇಲ್ಕಂಡ ಅಧಿಸೂಚನೆ ಅನ್ವಯ ಕೊಪ್ಪಳ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು (9 ಹುದ್ದೆ) /ಬೆರಳಚ್ಚುಗಾರರು (12 ಹುದ್ದೆ), ಬೆರಳಚ್ಚು–ನಕಲುಗಾರರ (4 ಹುದ್ದೆಗೆ) ಮತ್ತು ಜಾರಿಕಾರ (9 ಹುದ್ದೆ) ಮತ್ತು ಜವಾನರ (4 ಹುದ್ದೆ) ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿಪಡಿಸಿದ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ / ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ ದಿನಾಂಕ: 05–12–2011 ರಂದು ಸಾಯಂಕಾಲ 5–00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 05–12–2011 ಸಾಯಂಕಾಲ 5–00 ಗಂಟೆ**

**ಹುದ್ದೆಯ ಪದ ನಾಮ : ಶೀಘ್ರಲಿಪಿಗಾರ**

ಖಾಲಿ ಹುದ್ದೆಗಳ ಸಂಖ್ಯೆ: 09

ವೇತನ ಶ್ರೇಣಿ: 7250–175–7800–200–8600–225–9500–250–10500–300–12300–350–13350. ಹಾಗೂ ಲಭ್ಯವಿರುವ ಇತರೆ ಭತ್ಯಗಳು.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಕ.ಮಾ.ಅ. | ಯೋ.ಅ. | ಅಂಗವಿಕಲ | ಒಟ್ಟು |
|---|---|---|---|---|---|---|---|---|
| ಪ.ಜಾತಿ | | 01 | | | | | | 01 |
| ಪ್ರ.ವರ್ಗ–II(A) | 01 | 01 | | | | | | 02 |
| ಪ್ರ.ವರ್ಗ–II(B) | 01 | | | | | | | 01 |
| ಸಾಮಾನ್ಯ ಅಭ್ಯರ್ಥಿ | 02 | 01 | 02 | | | | | 05 |
| **ಒಟ್ಟು** | **04** | **03** | **02** | | | | | **09** |

**ಶೈಕ್ಷಣಿಕ ವಿದ್ಯಾರ್ಹತೆ**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (Senior Grade) ಕನ್ನಡ ಮತ್ತು ಅಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.
3) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (Senior Grade) ಕನ್ನಡ ಮತ್ತು ಅಂಗ್ಲ ಭಾಷೆಗಳ ಶೀಘ್ರಲಿಪಿ ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ:**

ಒಂದು ನಿಮಿಷಕ್ಕೆ 120 ಶಬ್ಧಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ (ಗರಿಷ್ಟ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಟ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ.

**(2) ಹುದ್ದೆಯ ಪದನಾಮ: ಬೆರಳಚ್ಚುಗಾರರು**

ಖಾಲಿ ಹುದ್ದೆಗಳ ಸಂಖ್ಯೆ: 12

ವೇತನ ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾ.ಸೈ. | ಕ.ಮಾ.ಅ. | ಯೋ.ಅ. | ಅಂಗವಿಕಲ | ಒಟ್ಟು |
|---|---|---|---|---|---|---|---|---|
| ಪ.ಜಾತಿ | 01 | | 01 | | | | | 02 |
| ಪ್ರ.ವರ್ಗ–II (A) | 01 | | 01 | | | | | 02 |
| ಪ್ರ.ವರ್ಗ–III (A) | 01 | | | | | | | 01 |
| ಪ್ರ.ವರ್ಗ–III (B) | 01 | | | | | | | 01 |
| ಸಾಮಾನ್ಯಅಭ್ಯರ್ಥಿ | 02 | 02 | 01 | 01 | | | | 06 |
| **ಒಟ್ಟು** | **06** | **02** | **03** | **01** | | | | **12** |

**ಶೈಕ್ಷಣಿಕ ವಿದ್ಯಾರ್ಹತೆ**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.

2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಬೆರಳಚ್ಚು ಕಿರಿಯ ದರ್ಜೆ ಮತ್ತು ಹಿರಿಯ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು. ಅಥವಾ ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯ ನಡೆಸುವ ಸೆಕ್ರೆಟರಿಯಲ್ ಪ್ರಾಕ್ಟಿಸ್ ಪಠ್ಯಕ್ರಮದ ಡಿಪ್ಲೊಮಾ ಪದವಿಯೊಂದಿಗೆ ಕನ್ನಡ ಮತ್ತು ಅಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಹೊಂದಿರಬೇಕು.

**ಅರ್ಹತಾ ಪರೀಕ್ಷೆ:**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತ ಲೇಖನ ನೀಡಲಾಗುವುದು (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

**(3) ಹುದ್ದೆಯ ಪದನಾಮ : ಬೆರಳಚ್ಚು –ನಕಲುಗಾರರು**

ಖಾಲಿ ಹುದ್ದೆಗಳ ಸಂಖ್ಯೆ: 04

ವೇತನ ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾ.ಸೈ. | ಕ.ಮಾ.ಅ. | ಯೋ.ಅ. | ಅಂಗವಿಕಲ | ಒಟ್ಟು |
|---|---|---|---|---|---|---|---|---|
| ಪ್ರ.ವರ್ಗ–II(A) | | 01 | | | | | | 01 |
| ಪ್ರ.ವರ್ಗ–II(B) | 01 | | | | | | | 01 |
| ಸಾಮಾನ್ಯ ಅಭ್ಯರ್ಥಿ | 01 | | 01 | | | | | 02 |
| **ಒಟ್ಟು** | **02** | **01** | **01** | | | | | **04** |

**ಶೈಕ್ಷಣಿಕ ವಿದ್ಯಾರ್ಹತೆ**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.

2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿವತಿಯಿಂದ ನಡೆಸುವ ಕನ್ನಡ ಹಾಗೂ ಅಂಗ್ಲ ಭಾಷೆಗಳ ಬೆರಳಚ್ಚು ಕಿರಿಯ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು. ಅಥವಾ ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯ ನಡೆಸುವ ಸೆಕ್ರಟರಿಯಲ್ ಪ್ರಾಕ್ಟಿಸ್ ಪಠ್ಯಕ್ರಮದ ಡಿಪ್ಲೊಮಾ ಪದವಿಯೊಂದಿಗೆ ಕನ್ನಡ ಮತ್ತು ಅಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಹೊಂದಿರಬೇಕು.

**ಅರ್ಹತಾ ಪರೀಕ್ಷೆ:**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು. (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

(4) **ಹುದ್ದೆಯ ಪದನಾಮ : ಜಾರಿಕಾರರು**

ಖಾಲಿ ಹುದ್ದೆಗಳ ಸಂಖ್ಯೆ: 09

ವೇತನ ಶ್ರೇಣಿ: 5500–100–6000–125–6500–150–7100–175–7800–200–8600–225–9500.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾ.ಸೈ. | ಕ.ಮಾ.ಅ. | ಯೋ.ಅ. | ಅಂಗವಿಕಲ | ಒಟ್ಟು |
|---|---|---|---|---|---|---|---|---|
| ಪ.ಜಾತಿ | 01 | | | | | | | 01 |
| ಪ್ರ.ವರ್ಗ–II(A) | 01 | | 01 | | | | | 02 |
| ಪ್ರ.ವರ್ಗ–III(B) | 01 | | | | | | | 01 |
| ಸಾಮಾನ್ಯ ಅಭ್ಯರ್ಥಿ | 01 | 01 | 02 | 01 | | | | 05 |
| **ಒಟ್ಟು** | **04** | **01** | **03** | **01** | | | | **09** |

**ಶೈಕ್ಷಣಿಕ ವಿದ್ಯಾರ್ಹತೆ**

1) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
2) ಲೈಟ್ ಮೋಟರ್ ವೆಹಿಕಲ್ ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

(5) **ಹುದ್ದೆಯ ಪದನಾಮ : ಜವಾನರು**

ಖಾಲಿ ಹುದ್ದೆಗಳ ಸಂಖ್ಯೆ: 04

ವೇತನ ಶ್ರೇಣಿ: 4800–100–6000–125–6500–150–7100–175–7275.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾ.ಸೈ. | ಕ.ಮಾ.ಅ. | ಯೋ.ಅ. | ಅಂಗವಿಕಲ | ಒಟ್ಟು |
|---|---|---|---|---|---|---|---|---|
| ಪ.ಪಂಗಡ | | 01 | | | | | | 01 |
| ಪ್ರ.ವರ್ಗ–II(A) | | | 01 | | | | | 01 |
| ಸಾಮಾನ್ಯ ಅಭ್ಯರ್ಥಿ | | | | 01 | | | 01 | 02 |
| **ಒಟ್ಟು** | | **01** | **01** | **01** | | | **01** | **04** |

**ಶೈಕ್ಷಣಿಕ ವಿದ್ಯಾರ್ಹತೆ**

1) 7ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣತೆ.
2) ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು.

**ಪಿಂಚಣಿ ಸೌಲಭ್ಯ:** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ: 31–03–2006 ರಂತೆ.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 1982 ಮತ್ತು 2007ರ ಅನ್ವಯ ನೇರನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಾನುಸಾರ ಆಯ್ಕೆ ಮಾಡಲಾಗುವುದು.

**ಸ್ಪರ್ಧಾತ್ಮಕ ಪರೀಕ್ಷೆ:** ಶೀಘ್ರಲಿಪಿಗಾರ, ಬೆರಳಚ್ಚುಗಾರ, ಬೆರಳಚ್ಚು–ನಕಲುಗಾರ ಹುದ್ದೆಗೆ ಅಭ್ಯರ್ಥಿಯನ್ನು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಆಯ್ಕೆ ಮಾಡಿಕೊಳ್ಳಲಾಗುವುದು.

**ಪರಿವೀಕ್ಷಣಾ ಅವಧಿ :** ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ವಯೋಮಿತಿ :**

1) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

2) ಗರಿಷ್ಠ ವಯೋಮಿತಿ :

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ, | 38 ವರ್ಷ |
| ಪ.ಜಾ / ಪ.ಪಂ / ಪ್ರ– 1 | 40 ವರ್ಷ |

1) ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು (ಈ ಬಗ್ಗೆ ಮೀಸಲಾತಿ ಕೋರಿದಲ್ಲಿ ಪ್ರಮಾಣಪತ್ರ ಸಲ್ಲಿಸಬೇಕು)

2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗದ ಪ್ರತಿ ಸಲ್ಲಿಸಬೇಕು.

3) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಗಳ ಮೀಸಲಾತಿ ಪ್ರಮಾಣಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ ಪ್ರತಿ ಸಲ್ಲಿಸಬೇಕು.(ಮೀಸಲಾತಿ ಕೋರಿದಲ್ಲಿ)

4) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ ಪ್ರತಿ ಸಲ್ಲಿಸಬೇಕು. (ಮೀಸಲಾತಿ ಕೋರಿದಲ್ಲಿ)(ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2 ರ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲ್ ರುಜು ಪಡೆದಿರತಕ್ಕದ್ದು.

5) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲ್ ರುಜು ಪಡೆದಿರತಕ್ಕದ್ದು. (ಮೀಸಲಾತಿ ಕೋರಿದ್ದಲ್ಲಿ).

6) ಅಂಗವಿಕಲ ಅಭ್ಯರ್ಥಿ:– ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000, ದಿನಾಂಕ: 03–09–2005 ರಲ್ಲಿ ಅಂಗವಿಕಲರೆಂದು ಗುರುತಿಸಿರುವ ಕ್ರಮ ಸಂಖ್ಯೆ: iii ರಿಂದ vii ರವರೆಗಿನ (Leprosy cured, Hearing impairment, Locomotor disability, Mental retardation & Mental illness) ನ್ಯೂನತೆಯಲ್ಲಿ ಶೇ.40ಕ್ಕೆ ಕಡಿಮೆ ಇಲ್ಲದಂತೆ ಬಳಲುತ್ತಿರುವ ವ್ಯಕ್ತಿಗಳು.

ಈ ಅಂಗವಿಕಲ ಮೀಸಲಾತಿಯಡಿ ಆಯ್ಕೆ ಹೊಂದುವ ಅಭ್ಯರ್ಥಿಗಳು ಸಹ ಈ ನ್ಯೂನತೆಯನ್ನು ಹೊಂದಿದ್ದರೂ ಸದರಿ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಅಡ್ಡಿ ಉಂಟಾಗದೆಂದು ತಿಳಿಸುವ ದೈಹಿಕ ಅರ್ಹತೆಯ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಸೇರುವ ಮುನ್ನ ನೀಡಬೇಕಾಗುತ್ತದೆ.

**(ಅಂಧತ್ವ ಹಾಗೂ ಕಡಿಮೆ ದೃಷ್ಟಿ ಹೊಂದಿರುವ ಕಾರಣದ ಮೇರೆಗೆ ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ಈ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಲ್ಲ)**

7) ಯೋಜನಾ ನಿರಾಶ್ರಿತ ಅಭ್ಯರ್ಥಿ:– ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸೇನೆನಿ 99, ದಿ: 23–11–2000ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸತಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ) ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

8) ಶಾಲಾ ಮುಖ್ಯೋಪಾಧ್ಯಾಯರು / ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳ ಇತ್ತೀಚಿನ ಎರಡು ನಡತೆ ಪ್ರಮಾಣ ಪತ್ರಗಳ ಪ್ರತಿ ಸಲ್ಲಿಸಬೇಕು.

**ಸೂಚನೆ: ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.**

**ಇತರೆ ಸೂಚನೆಗಳು :**

9) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು

10) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

11) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

12) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ, ಲಗತ್ತಿಸಿದ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

13) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ/ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.

14) ಶೀಘ್ರಲಿಪಿಗಾರ , ಬೆರಳಚ್ಚುಗಾರ ಮತ್ತು ಬೆರಳಚ್ಚು–ನಕಲುಗಾರ ಹುದ್ದೆಗಳ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಿ ಅರ್ಹ ಅಭ್ಯರ್ಥಿಗಳಿಗೆ ಮಾತ್ರ 1:5 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.

15) ಜಾರಿಕಾರ ಹುದ್ದೆಯ ಅಭ್ಯರ್ಥಿಗಳಿಗೆ ಗರಿಷ್ಠ ಅಂಕ ಆಧಾರದ ಅರ್ಹತೆ ಮೇರೆಗೆ 1:25 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.

16) ಜವಾನರ ಹುದ್ದೆಯ ಅಭ್ಯರ್ಥಿಗಳಿಗೆ ಗರಿಷ್ಠ ಅಂಕ ಆಧಾರದ ಅರ್ಹತೆ ಮೇರೆಗೆ 1:10 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.

17) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ಅಭ್ಯರ್ಥಿಗಳಿಗೆ ಸೂಚನೆ:–**

1) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

2) ಅಪೂರ್ಣವಾಗಿರುವ ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

3) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಪೇಕ್ಷಣಾ ಪ್ರಮಾಣ ಪತ್ರವನ್ನು ಪಡೆದು ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

4) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.

5) ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ 5–00 ರೂಪಾಯಿ ಅಂಚೆ ಮುದ್ರಾಂಕ (ಪೋಸ್ಟಲ್ ಸ್ಟ್ಯಾಂಪ್) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.

6) ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

7) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.

8) ವಿವರಗಳನ್ನು ಕಾಲಂಗಳಲ್ಲಿ ಭರ್ತಿ ಮಾಡಿ ಬರೆದ ಅರ್ಜಿಗಳನ್ನು ಅಂಚೆ ಅಥವಾ ಕೋರಿಯರ್ ಮೂಲಕ ಅಥವಾ ಸ್ವತ: ತಂದು ಸಲ್ಲಿಸಿದಲ್ಲಿ ಈ ಕಛೇರಿಯ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

**ಸಾಮಾನ್ಯ ಸೂಚನೆ:**

1) ನೈತಿಕ ದುರ್ನಡತೆಯಿಂದಾಗಿ / ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ / ಕೇಂದ್ರ / ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ / ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ / ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.

2) ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ.

3) ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.

4) ಅಭ್ಯರ್ಥಿಗಳ ಅರ್ಹತೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.

**ವಿಶೇಷ ಸೂಚನೆ :**

ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಂಚೆಯ ಮತ್ತು ಕೋರಿಯರ್ ಮೂಲಕ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಮಾಹಿತಿಯನ್ನು ಸಂಪೂರ್ಣವಾಗಿ ಓದಿ ತಿಳಿದುಕೊಂಡು ನಿಗದಿತ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ/ ಗಣಕೀಕೃತ ಪ್ರತಿಯಲ್ಲಿ ಎಲ್ಲಾ ಅಂಕಣಗಳನ್ನು ನಿಗದಿತ ಉತ್ತರಗಳಿಂದ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಸಿ.ಎಸ್.ಮಾಳಗಿ,**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಪ್ಪಳ.

**ಅರ್ಜಿ ನಮೂನೆ**

**ಕೊಪ್ಪಳ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ / ಬೆರಳಚ್ಚು–ನಕಲುಗಾರರ/ಜಾರಿಕಾರರು/ ಜವಾನರ ಹುದ್ದೆಗೆ ಅರ್ಜಿ**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ: 05–12–2011)**

ಗೆ,
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಪ್ಪಳ ಜಿಲ್ಲೆ, ಕೊಪ್ಪಳ– ಇವರಿಗೆ.

ಇತ್ತೀಚಿನ ಭಾವ ಚಿತ್ರ ಲಗತ್ತಿಸಬೇಕು.

ಮಾನ್ಯರೇ,

ಕೊಪ್ಪಳ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ:ಎಡಿಎಂಎನ್–**03/2011,** ದಿನಾಂಕ: **04–11–2011** ರ ಪ್ರಕಟಣೆ ಮೇರೆಗೆ ನಾನು ಈ ಕೆಳಕಂಡ ಮಾಹಿತಿಗಳೊಂದಿಗೆ ______________ ಹುದ್ದೆಗೆ ಹಾಗೂ ________________ಮೀಸಲಾತಿ ಅಡಿಯಲ್ಲಿ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು | | | |
| 2 | ತಂದೆಯ/ತಾಯಿಯ/ಗಂಡನ ಹೆಸರು | | | |
| 3 | ಪೂರ್ಣ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| | | | | |
| 6 | ಲಿಂಗ | ಪುರುಷ/ ಮಹಿಳೆ | | |
| 7 | ವಿವಾಹಿತರಾಗಿದ್ದರೆ ಗಂಡನ ಅಥವ ಹೆಂಡತಿಯ ಹೆಸರು | | | |
| 8 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ | | | |

| | | | | |
|---|---|---|---|---|
| 9 | ರಾಷ್ಟ್ರೀಯತೆ :<br>ಧರ್ಮ/ ಜಾತಿ: | ರಾಷ್ಟ್ರೀಯತೆ | ಧರ್ಮ | ಜಾತಿ |
| | | | | |

| | | | | | |
|---|---|---|---|---|---|
| 10 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು:– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡವಾರು ಅಂಕಗಳು |
| ಎ | 7ನೇ ತರಗತಿ ಪರೀಕ್ಷೆ | | | | |
| ಬಿ | ಎಸ್.ಎಸ್.ಎಲ್.ಸಿ/ ತತ್ಸಮಾನ ಪರೀಕ್ಷೆ | | | | |
| ಸಿ | ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ | ಹಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಇ | ಕಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಎಫ್ | ಹಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಜಿ | ಕಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಹೆಚ್ | ಹಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಐ | ಕಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| ಜೆ | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| ಕೆ | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |

| | | | | | |
|---|---|---|---|---|---|
| 10 | ಕೋರುವ ಮೀಸಲಾತಿಗಳು (ಕೊರುವ ಮೀಸಲಾತಿಯನ್ನು ಟಿಕ್ ಹಾಕುವುದರ ಮೂಲಕ ಗುರುತಿಸಿ ಮತ್ತು ಎಲ್ಲಾ ದಾಖಲೆ–ಗಳನ್ನು ಸ್ವಯಂ ಧೃಢೀಕರಿಸಿ ಲಗತ್ತಿಸಿರಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 |
| | | | | | |
| | | **2ಎ** | **2ಬಿ** | **3ಎ** | **3ಬಿ** |
| | | | | | |

| | | | | | | |
|---|---|---|---|---|---|---|
| 11 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ? ಕೋರುವ ಮೀಸಲಾತಿಗಳು(ಕೊರುವ ಮೀಸಲಾತಿಯನ್ನು ಟಿಕ್ ಹಾಕುವುದರ ಮೂಲಕಗುರುತಿಸಿ ಮತ್ತು ಎಲ್ಲಾ ದಾಖಲೆ–ಗಳನ್ನು ಸ್ವಯಂ ಧೃಢೀಕರಿಸಿ ಲಗತ್ತಿಸಿರಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ. | ಅಂಗವಿಕಲ. ಅ | ಯೋ.ನಿ.ಅ. |
| | | | | | | |
| 12 | ನೀವು ವಾಹನ ಚಾಲನೆಯ ಲೈಸೆನ್ಸ್ ಹೊಂದಿದ್ದೀರ? (ಸ್ವಯಂ ಧೃಢೀಕರಿಸಿದ ಚಾಲ್ತಿಯಲ್ಲಿರುವ ವಾಹನ ಚಾಲನಾ ರಹದಾರಿ ನಕಲನ್ನು ಲಗತ್ತಿಸಬೇಕು. ಜಾರಿಕಾರರ ಹುದ್ದೆಗೆ ಮಾತ್ರ ಅನ್ವಯವಾಗುತ್ತದೆ. | | | | | |
| 13 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಸಬೇಕು) | | | | | |
| 14 | ಸಲ್ಲಿಸಲು ಇಚ್ಛೆ ಪಡುವ ಇತರೆ ಯಾವುದಾದರು ವಿವರಗಳು | | | | | |

**ಸೂಚನೆ:–** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ/ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಕೊಪ್ಪಳ ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ಸಿದ್ಧಳಿದ್ದೇನೆ.

ಸ್ಥಳ:

ದಿನಾಂಕ: **ಅಭ್ಯರ್ಥಿಯ ಸಹಿ.**

---

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರದಿಂದ ನಿರಾಪೇಕ್ಷಣಾ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ________________ಇವರು ನಮ್ಮ ಇಲಾಖೆಯಲ್ಲಿ ದಿನಾಂಕ: __________ ರಿಂದ __________ ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು __________ ಹುದ್ದೆಗೆ ಅರ್ಹರಿರುತ್ತಾರೆ ಮತ್ತು __________ ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ: ಸಹಿ:

ಪದನಾಮ:

ದಿನಾಂಕ: ಕಛೇರಿಯ ಮೊಹರು:

**ಪಿ.ಆರ್. 327**